# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 741(923) |
| ಸದಸ್ಯರ ಹೆಸರು | : | ಶ್ರೀ ಚಿದಾನಂದ ಎಂ. ಗೌಡ(ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 20/09/2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ದೈಹಿಕ ಶಿಕ್ಷಣ ಶಿಕ್ಷಕರನ್ನು ಸಹ ಶಿಕ್ಷಕರು ಎಂದು ಪರಿಗಣಿಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ; (ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಇಡಿ 290 ಎಸ್ಎಲ್‌ಬಿ 2006, ದಿ:06/08/2007ರಲ್ಲಿ ಪ್ರೋ:ವೈದ್ಯನಾಥನ್ ವರದಿಗೆ ಅನುಮೋದನೆ ನೀಡಿದ್ದು, ಸದರಿ ವರದಿಯಲ್ಲಿನ 14 ಅಂಶಗಳ ಪೈಕಿ 13 ಅಂಶಗಳನ್ನು |
| ಆ | ಈ ಬಗ್ಗೆ ಸಚಿವ ಸಂಪುಟದಲ್ಲಿ ಮಂಡಿಸಿ ಅನುಮೋದನೆ ಪಡೆಯಲಾಗಿದೆಯೇ; | ಜಾರಿಗೊಳಿಸಲಾಗಿದ್ದು, ಉಳಿದ 14ನೇ ಅಂಶವಾದ ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸಲು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಷ್ಕರಣೆ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರು ದಿನಾಂಕ:30/05/2018ರಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.<br><br>ಈ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:24/05/2018ರಂದು ಹಾಗೂ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:23/10/2018ರಂದು ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯಲ್ಲಿ ಕರಡು ನಿಯಮಗಳಲ್ಲಿ ಕೆಲವೊಂದು ಅಂಶಗಳನ್ನು ಸೇರ್ಪಡೆಗೊಳಿಸಲು ಹಾಗೂ ಕೆಲವು ಅಂಶಗಳನ್ನು ಕೈಬಿಡಲು ನಿರ್ಣಯಿಸಿ, ಕರಡು ತಿದ್ದುಪಡಿ ನಿಯಮಗಳನ್ನು ಅನುಮೋದಿಸಿರುತ್ತಾರೆ.<br><br>ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣಾ |

| | | |
|---|---|---|
| | | ತಿದ್ದುಪಡಿ ನಿಯಮಗಳ ಕುರಿತಂತೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದ್ದು, ಆರ್ಥಿಕ ಇಲಾಖೆಯು ಕೆಲವು ಮಾಹಿತಿ ಒದಗಿಸುವಂತೆ ಕೋರಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗಳು ಕೆಲವು ಅಂಶಗಳ ಬಗ್ಗೆ ಸಲಹೆ / ಅಭಿಪ್ರಾಯ ನೀಡಿವೆ.<br><br>ಈ ಕುರಿತಂತೆ ದಿನಾಂಕ:17/06/2020ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ಇತರೆ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಲು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ನೀಡಿರುವ ಸಲಹೆಗಳನ್ನು ಅಳವಡಿಸಿಕೊಂಡು ಪರಿಷ್ಕೃತ ಕರಡು ನಿಯಮಗಳನ್ನು ಸಿದ್ಧಪಡಿಸಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪರಿಶೋಧನೆಗೆ ಕಳುಹಿಸಲು ನಿರ್ಣಯಿಸಲಾಗಿದೆ. ಅದರಂತೆ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಿ, ಅಭಿಪ್ರಾಯ / ಸಹಮತಿಗಾಗಿ ಕಡತವನ್ನು ದಿನಾಂಕ:16/02/2021ರಲ್ಲಿ ಶಿಕ್ಷಣ ಇಲಾಖೆಯಿಂದ ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದು, ಆರ್ಥಿಕ ಇಲಾಖೆಯಿಂದ, "ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ವಿಷಯಕ್ಕೆ ಭಾಗ-1ರ ಕ್ರಮ ಸಂಖ್ಯೆ:8ರಲ್ಲಿನ ಪ್ರೌಢ ಶಾಲೆಯ ಮುಖ್ಯ ಶಿಕ್ಷಕರು / ಶಿಕ್ಷಕಿಯರು 88 ಹುದ್ದೆ ಮತ್ತು 304 ಹುದ್ದೆಗಳು ಹಾಗೂ ಭಾಗ-2ರಲ್ಲಿನ ಕ್ರಮ ಸಂಖ್ಯೆ:23 ಪ್ರೌಢ ಶಾಲಾ ಸಹ ಶಿಕ್ಷಕ / ಶಿಕ್ಷಕರ ಗ್ರೇಡ್-2ರ 1520 ಹುದ್ದೆಗಳು ಹಾಗೂ ಕ್ರಮ ಸಂಖ್ಯೆ:33ರ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್-1ರ 304 ಹುದ್ದೆಗಳು ಮತ್ತು ಭಾಗ-4ರ ಕ್ರಮ ಸಂಖ್ಯೆ: 49ರ ಲೆಕ್ಕ ಅಧೀಕ್ಷಕರು 34 ಹುದ್ದೆಗಳಿಗೆ ಸಂಬಂಧಿಸಿದಂತೆ, |

| | | |
|---|---|---|
| | | ಮಾಹಿತಿ / ಸ್ಪಷ್ಟೀಕರಣವನ್ನು ದಾಖಲೆಗಳೊಂದಿಗೆ ಒದಗಿಸುವಂತೆ ಮತ್ತು ಈ ಬಗ್ಗೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ತಿಳಿಸಿ ದಿನಾಂಕ:18/08/2021ರಂದು ಕಡತ ಹಿಂದಿರುಗಿಸಿರುತ್ತಾರೆ. ಈ ಸಂಬಂಧ, ಪರಿಶೀಲಿಸಿ ಆರ್ಥಿಕ ಇಲಾಖೆಯಿಂದ ಕೋರಿರುವ ಮಾಹಿತಿಯನ್ನು ನೀಡಿ ಆರ್ಥಿಕ ಇಲಾಖೆಯ ಸಹಮತಿ / ಅಭಿಪ್ರಾಯ ಪಡೆದು ನಂತರ ಅವುಗಳನ್ನು ಪರಿಷ್ಕೃತ ಕರಡು ನಿಯಮದಲ್ಲಿ ಅಳವಡಿಸಿಕೊಂಡು ಕರಡು ನಿಯಮದ ಪರಿಶೋಧನೆಗಾಗಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗೆ ಕಳುಹಿಸಲು ಕ್ರಮವಹಿಸಲಾಗುವುದು. ನಂತರ ಅಂತಿಮವಾಗಿ ಸಚಿವ ಸಂಪುಟದ ಅನುಮೋದನೆ ಪಡೆದು ಕರಡು ನಿಯಮಗಳನ್ನು ಪ್ರಕಟಿಸಿ ನಿಯಮಾನುಸಾರ ಅಂತಿಮಗೊಳಿಸಲಾಗುವುದು. |
| ಇ | ಯಾವ ಕಾಲಾವಧಿಯಲ್ಲಿ ಪ್ರಕ್ರಿಯೆ ಸಂಪೂರ್ಣವಾಗಿ ಮುಗಿದು ಆದೇಶಿಸಲಾಗುವುದು? | ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆಯು ಈಗಾಗಲೇ ಚಾಲನೆಯಲ್ಲಿದ್ದು, ಆದಷ್ಟು ಶೀಘ್ರವಾಗಿ ಕ್ರಮಕೈಗೊಳ್ಳಲಾಗುವುದು. |

ಸಂಖ್ಯೆ:ಇಪಿ 89 ಡಿಎಆರ್ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು